# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** **974**

ಸದಸ್ಯರ ಹೆಸರು ಶ್ರೀ. ಲಹರ್ ಸಿಂಗ್ ಸಿರೋಯಾ

ಉತ್ತರಿಸುವವರು ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು

ಉತ್ತರಿಸಬೇಕಾದ ದಿನಾಂಕ 13-03-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕಲ್ಯಾಣ ಕರ್ನಾಟಕ ಒಳಗೊಂಡಿರುವ ಜಿಲ್ಲೆಗಳು ಸೇರಿದಂತೆ ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿಯಲ್ಲಿ ಮಕ್ಕಳಲ್ಲಿ ಅಪೌಷ್ಠಿಕತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; ಬಂದಿದ್ದಲ್ಲಿ, ಅದು ಎಷ್ಟು ಪ್ರಮಾಣದಲ್ಲಿದೆ; | ಬಂದಿದೆ.<br><br>ಅಪೌಷ್ಠಿಕತೆಯ ಶೇಕಡ 0.28ರ ಪ್ರಮಾಣದಲ್ಲಿದೆ. ಜಿಲ್ಲಾವಾರು ವಿವರವನ್ನು ಅನುಬಂಧ-1ರಲ್ಲಿ ಒದಗಿಸಲಾಗಿದೆ. |
| ಆ. | ಮಕ್ಕಳಲ್ಲಿ ಅಪೌಷ್ಠಿಕತೆ ಹೆಚ್ಚಾಗಲು ಕಾರಣವೇನು; | ಕಳೆದ ಎರಡು ವರ್ಷಗಳಿಗೆ ಹೋಲಿಸಿದಾಗ ಮಕ್ಕಳಲ್ಲಿ ಅಪೌಷ್ಠಿಕತೆ ಕಡಿಮೆಯಾಗಿರುತ್ತದೆ. |
| ಇ. | ಮಕ್ಕಳಲ್ಲಿನ ಅಪೌಷ್ಠಿಕತೆ ನಿವಾರಿಸಲು ಸರ್ಕಾರ ಕೈಗೊಂಡ ಕ್ರಮಗಳೇನು (ವಿವರವನ್ನು ಒದಗಿಸುವುದು) | ಮಕ್ಕಳಲ್ಲಿನ ಅಪೌಷ್ಠಿಕತೆ ನಿವಾರಿಸಲು ಸರ್ಕಾರ ಕೈಗೊಂಡ ಕ್ರಮಗಳ ಬಗ್ಗೆ ವಿವರವನ್ನು ಅನುಬಂಧ-2 ರಲ್ಲಿ ಒದಗಿಸಲಾಗಿದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ : ಮಮಇ 69 ಐಸಿಡಿ 2020

ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ಲಹರ್‌ಸಿಂಗ್ ಸಿರೋಯಾ(ವಿಧಾನ ಸಭೆಯಿಂದ ಚುನಾಯಿತರಾದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:908(974) ಕ್ಕೆ ಅನುಬಂಧ-1

| ಕ್ರ. ಸಂ. | ಜಿಲ್ಲೆಯ ಹೆಸರು | ತೂಕ ಮಾಡಿದ ಒಟ್ಟು ಮಕ್ಕಳ ಸಂಖ್ಯೆ | ತೀವ್ರ ಅಪೌಷ್ಠಿಕ ಮಕ್ಕಳ ಸಂಖ್ಯೆ | ಶೇಕಡಾವಾರು |
|---|---|---|---|---|
| 1 | ಬಾಗಲಕೋಟೆ | 179990 | 350 | 0.19 |
| 2 | ಬೆಂಗಳೂರು ನಗರ | 175134 | 143 | 0.08 |
| 3 | ಬೆಂಗಳೂರು ಗ್ರಾ. | 50248 | 18 | 0.04 |
| 4 | ಬೆಳಗಾಂ | 469715 | 1162 | 0.25 |
| 5 | ಬಳ್ಳಾರಿ | 236221 | 1004 | 0.43 |
| 6 | ಬೀದರ್ | 121685 | 101 | 0.08 |
| 7 | ಬಿಜಾಪುರ | 215302 | 1114 | 0.52 |
| 8 | ಚಾಮರಾಜನಗರ | 56024 | 88 | 0.16 |
| 9 | ಚಿಕ್ಕಬಳ್ಳಾಪುರ | 78739 | 139 | 0.18 |
| 10 | ಚಿಕ್ಕಮಗಳೂರು | 54057 | 259 | 0.48 |
| 11 | ಚಿತ್ರದುರ್ಗ | 124654 | 320 | 0.26 |
| 12 | ದಕ್ಷಿಣ ಕನ್ನಡ | 102069 | 49 | 0.05 |
| 13 | ದಾವಣಗೆರೆ | 121579 | 226 | 0.19 |
| 14 | ಧಾರವಾಡ | 118470 | 256 | 0.22 |
| 15 | ಗದಗ | 78977 | 478 | 0.61 |
| 16 | ಕಲಬುರಗಿ | 245622 | 773 | 0.31 |
| 17 | ಯಾದಗಿರಿ | 114015 | 441 | 0.39 |
| 18 | ಹಾಸನ | 72727 | 123 | 0.17 |
| 19 | ಹಾವೇರಿ | 131769 | 773 | 0.59 |
| 20 | ಕೊಡಗು | 27424 | 67 | 0.24 |
| 21 | ಕೋಲಾರ | 84788 | 100 | 0.12 |
| 22 | ಕೊಪ್ಪಳ | 135640 | 767 | 0.57 |
| 23 | ಮಂಡ್ಯ | 86913 | 159 | 0.18 |
| 24 | ಮೈಸೂರು | 131887 | 153 | 0.12 |
| 25 | ರಾಮನಗರ | 51331 | 191 | 0.37 |
| 26 | ರಾಯಚೂರು | 196964 | 751 | 0.38 |
| 27 | ಶಿವಮೊಗ್ಗ | 110170 | 311 | 0.28 |
| 28 | ತುಮಕೂರು | 136113 | 164 | 0.12 |
| 29 | ಉಡುಪಿ | 59526 | 100 | 0.17 |
| 30 | ಉತ್ತರ ಕನ್ನಡ | 95430 | 335 | 0.35 |
| ಒಟ್ಟು | | **3863183** | **10915** | **0.28** |

**ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ಲಹರ್ ಸಿಂಗ್ ಸಿರೋಯಾ, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ.974 ಕ್ಕೆ ಅನುಬಂಧ:2**

**ರಾಜ್ಯದಲ್ಲಿ ಅಪೌಷ್ಠಿಕತೆಯನ್ನು ತಡೆಗಟ್ಟಲು ಸರ್ಕಾರ ರೂಪಿಸಿರುವ ಯೋಜನೆಗಳು ಮತ್ತು ತೆಗೆದುಕೊಂಡಿರುವ ಕ್ರಮಗಳು ಕೆಳಕಂಡಂತಿದೆ.**

**1 ) ಕೇಂದ್ರ ಪುರಸ್ಕೃತ ಸಮಗ್ರ ಶಿಶು ಅಭಿವೃದ್ಧಿ ಯೋಜನೆ: –**

ಕೇಂದ್ರ ಪುರಸ್ಕೃತ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿ ಸಾಮಾನ್ಯ ಮಕ್ಕಳಿಗೆ ಪ್ರತಿ ದಿನ ರೂ. 8.00 –ರಂತೆ ಘಟಕ ವೆಚ್ಚ ಭರಿಸುತ್ತಿದ್ದು, ತೀವ್ರ ಅಪೌಷ್ಠಿಕತೆಯುಳ್ಳ ಮಕ್ಕಳಿಗೆ ರೂ. 12.00 ರ ಪೂರಕ ಪೌಷ್ಠಿಕ ಆಹಾರವನ್ನು ನೀಡಲಾಗುತ್ತಿದೆ.

**2) ಸೃಷ್ಠಿ ಯೋಜನೆ:**

- ಈ ಯೋಜನೆಯಡಿ 3 ರಿಂದ 6 ವರ್ಷದ ಎಲ್ಲಾ ಮಕ್ಕಳಿಗೆ ವಾರದಲ್ಲಿ 2 ದಿನ ಮೊಟ್ಟೆ ನೀಡಲಾಗುತ್ತಿದೆ.
- ಅತಿ ಕಡಿಮೆ ತೂಕವುಳ್ಳ ಮಕ್ಕಳಿಗೆ ವಾರದಲ್ಲಿ 3 ದಿನ ಮೊಟ್ಟೆ ಹಾಗೂ 200 ಎಂ.ಎಲ್. ಹಾಲು ಹಾಗೂ ಮೊಟ್ಟೆ ಉಪಯೋಗಿಸದ ಮಕ್ಕಳಿಗೆ ವಾರದಲ್ಲಿ 200 ಎಂ.ಎಲ್. ಹಾಲು ನೀಡಲಾಗುತ್ತಿದೆ.
- ಹಿಂದುಳಿದ ಜಿಲ್ಲೆಗಳಾದ ಬೀದರ್, ಕಲಬುರಗಿ, ಯಾದಗಿರಿ, ಕೊಪ್ಪಳ ಹಾಗೂ ರಾಯಚೂರಿನ ಸಾಧಾರಣ ಅಪೌಷ್ಠಿಕ ಮಕ್ಕಳಿಗೆ ವಾರದಲ್ಲಿ 3 ದಿನ ಹೆಚ್ಚುವರಿಯಾಗಿ ಮೊಟ್ಟೆ ಹಾಗೂ 3 ದಿನ 200 ಎಂ.ಎಲ್ ಕೆನೆಭರಿತ ಹಾಲನ್ನು ನೀಡಲಾಗುತ್ತಿದೆ.

**3) ಕ್ಷೀರ ಭಾಗ್ಯ ಯೋಜನೆ:**

ಈ ಯೋಜನೆಯಡಿ 6 ತಿಂಗಳಿನಿಂದ 6 ವರ್ಷದ ಮಕ್ಕಳಿಗೆ ವಾರದಲ್ಲಿ 5 ದಿನ 150 ಎಂ.ಎಲ್. ಕೆನೆಭರಿತ ಹಾಲು ನೀಡಲಾಗುತ್ತಿದೆ

**4) ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚ ಭರಿಸುವ ಯೋಜನೆ:**

- ತೀವ್ರ ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚ ಯೋಜನೆಯಡಿ ಔಷಧಿ ಹಾಗೂ ಚಿಕಿತ್ಸಾ ಆಹಾರಕ್ಕಾಗಿ (Therapeutic food) ಪ್ರತಿ ಮಗುವಿಗೆ ವಾರ್ಷಿಕ ರೂ.2000/–ಗಳಂತೆ ವೆಚ್ಚ ಭರಿಸಲಾಗುತ್ತಿದೆ.
- ಆರೋಗ್ಯ ಇಲಾಖೆಯ ಸಹಯೋಗದೊಂದಿಗೆ ಪೌಷ್ಠಿಕ ಪುನರ್ವಸತಿ ಕೇಂದ್ರ (NRC) ಗಳಲ್ಲಿ ಅಪೌಷ್ಠಿಕ ಮಕ್ಕಳಿಗೆ ಚಿಕಿತ್ಸೆ ನೀಡಲಾಗುತ್ತಿದೆ.

**ಮಕ್ಕಳಲ್ಲಿ ಅಪೌಷ್ಠಿಕತೆಯನ್ನು ಹೋಗಲಾಡಿಸಲು ಪೂರ್ವಬಾವಿ ಕ್ರಮವಾಗಿ ಆರೋಗ್ಯವಂತ ಮಗುವಿನ ಜನನದ ಉದ್ದೇಶದಿಂದ, ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.**

## 5) ಮಾತೃಪೂರ್ಣ ಯೋಜನೆ:

ಈ ಯೋಜನೆಯಡಿ ಗರ್ಭಿಣಿಯರಿಗೆ ಮತ್ತು ಬಾಣಂತಿಯರಿಗೆ ಅಂಗನವಾಡಿ ಕೇಂದ್ರಗಳಲ್ಲಿ ಮಧ್ಯಾಹ್ನ ಬಿಸಿಯೂಟವನ್ನು ನೀಡಲಾಗುತ್ತಿದೆ. ಅಂಗನವಾಡಿ ಕೇಂದ್ರಗಳಲ್ಲಿ ಇವರಿಗೆ ನಿಯಮಿತವಾಗಿ ಪ್ರತಿ ತಿಂಗಳು ಆರೋಗ್ಯ ತಪಾಸಣೆಯನ್ನು ಮಾಡಲಾಗುತ್ತಿದ್ದು, ತೂಕವನ್ನು ಅಳತೆ ಮಾಡಲಾಗುತ್ತಿದೆ. ಪೌಷ್ಠಿಕ ಆಹಾರ ಸೇವನೆ ಮತ್ತು ಆರೋಗ್ಯಪಾಲನೆ ಕುರಿತಂತೆ ಸಮಾಲೋಚನಾ ಸಭೆಗಳನ್ನು ಅಂಗನವಾಡಿ ಕೇಂದ್ರಗಳಲ್ಲಿ ನಡೆಸಲಾಗುತ್ತಿದೆ. ಫೋಲಿಕ್ ಆಸಿಡ್ ಮತ್ತು ಕ್ಯಾಲ್ಸಿಯಂ ಮಾತ್ರೆಗಳನ್ನು ಆರೋಗ್ಯ ಇಲಾಖೆಯ ವತಿಯಿಂದ ಅಂಗನವಾಡಿ ಕೇಂದ್ರಗಳಲ್ಲಿಯೇ ವಿತರಿಸಲಾಗುತ್ತಿದೆ.

## 6) ಪ್ರಧಾನ ಮಂತ್ರಿ ಮಾತೃವಂದನಾ ಯೋಜನೆ:

ಈ ಯೋಜನೆಯಡಿ ಗರ್ಭಿಣಿ / ಬಾಣಂತಿ ಮಹಿಳೆಯರಿಗೆ ರೂ.5000/- ಗಳ ಸಹಾಯಧನವನ್ನು ಮೂರು ಕಂತುಗಳಲ್ಲಿ ನೇರ ನಗದು ವರ್ಗಾಣೆ ಮೂಲಕ ಫಲಾನುಭವಿಯ ಖಾತೆಗೆ ವರ್ಗಾಯಿಸಲಾಗುವುದು.

ಮಹಿಳೆಯ ಮೊದಲ ಪ್ರಸವದ ಮತ್ತು ನಂತರದ ಸಾಕಷ್ಟು ವಿಶ್ರಾಂತಿಗಾಗಿ ಅಂಶಿಕ ಪರಿಹಾರವನ್ನು ಈ ಯೋಜನೆಯಡಿ ನೀಡಲಾಗುತ್ತಿದೆ.

## 7) ಮುಖ್ಯಮಂತ್ರಿ ಮಾತೃಶ್ರೀ ಯೋಜನೆ:

**ಮುಖ್ಯಮಂತ್ರಿ ಮಾತೃಶ್ರೀ** ಯೋಜನೆಯನ್ನು ನವೆಂಬರ್ 2018 ರಿಂದ ಜಾರಿಗೊಳಿಸಲಾಗುತ್ತಿದೆ. ಈ ಯೋಜನೆಯಡಿ ಬಿ.ಪಿ.ಎಲ್ ಮತ್ತು ಆದ್ಯತಾ ಕುಟುಂಬದ (Priority household) ಗರ್ಭಿಣಿಯರಿಗೆ ಮೊದಲ ಎರಡು ಜೀವಂತ ಹೆರಿಗೆಯ ಪೂರ್ವದ ಕೊನೆಯ ಮೂರು ತಿಂಗಳು ಮಾಸಿಕ ರೂ.1,000/- ಗಳಂತೆ ಹಾಗೂ ಬಾಣಂತಿಯರಿಗೆ ಹೆರಿಗೆ ನಂತರದ ಮೂರು ತಿಂಗಳ ಕಾಲ ಮಾಸಿಕ ರೂ.1,000/- ಗಳಂತೆ ಒಟ್ಟು ರೂ.6,000/- ಫಲಾನುಭವಿಗಳ ಆಧಾರ್ ಲಿಂಕ್ಡ್ ಬ್ಯಾಂಕ್ ಖಾತೆಗೆ ನೇರವಾಗಿ ವರ್ಗಾಯಿಸಲಾಗುತ್ತಿದೆ. ಈ ಯೋಜನೆಯಿಂದ ಗರ್ಭಿಣಿ ಹಾಗೂ ಬಾಣಂತಿಗೆ ಸೂಕ್ತ ಆಹಾರವನ್ನು ಸಕಾಲದಲ್ಲಿ ಸೇವಿಸಲು ವಿಶ್ರಾಂತಿ ಪಡೆಯಲು ಅವಕಾಶವಿದ್ದು, ಮಗುವಿಗೆ ಎದೆಹಾಲು ಉಣಿಸಲು ಹಾಗೂ ಪೋಷಣೆಗೆ ಸಹಕಾರಿಯಾಗುತ್ತದೆ.

## (8) ಪೋಷಣ್ ಅಭಿಯಾನ:

ವಿವಿಧ ಇಲಾಖೆಯಗಳ ಸಮನ್ವಯತೆಯೊಂದಿಗೆ ಅಪೌಷ್ಠಿಕತೆ ತಡೆಗಟ್ಟಲು ಕೇಂದ್ರ ಮತ್ತು ರಾಜ್ಯ ಸಹಭಾಗಿತ್ವದಲ್ಲಿ **ಪೋಷಣ್ ಅಭಿಯಾನ ಯೋಜನೆಯನ್ನು** ಕರ್ನಾಟಕದಲ್ಲಿ ಪೌಷ್ಠಿಕ ಕರ್ನಾಟಕವಾಗಿ ಜಾರಿಗೊಳಿಸಲಾಗುತ್ತಿದೆ. ಅಪೌಷ್ಠಿಕತೆಗೆ ಸಾಮಾಜಿಕ, ಶೈಕ್ಷಣಿಕ, ಕೌಟುಂಬಿಕ, ಅನುವಂಶಿಕ ಇನ್ನಿತರ

ಕಾರಣಗಳು ಸಹ ಇರಬಹುದಾಗಿದ್ದು ಈ ನಿಟ್ಟಿನಲ್ಲಿ ಕುಟುಂಬದ ಎಲ್ಲಾ ಸದಸ್ಯರಿಗೂ/ ಸಮುದಾಯದವರಿಗೂ ಅಪೌಷ್ಠಿಕತೆ ಕುರಿತಂತೆ ಮತ್ತು ನಿವಾರಣಾ ಮಾರ್ಗೋಪಾಯಗಳ ಕುರಿತಂತೆ ತಿಳುವಳಿಕೆ ನೀಡಲು ಪೋಷಣ್ ಅಭಿಯಾನ ಯೋಜನೆಯಡಿಯಲ್ಲಿ ಸಮುದಾಯ ಆಧಾರಿತ ಚಟುವಟಿಕೆಗಳನ್ನು/ ಜನಾಂದೋಲನ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ. ಈ ಯೋಜನೆಯಡಿಯಲ್ಲಿ ಮಕ್ಕಳಲ್ಲಿ ಅಪೌಷ್ಠಿಕತೆಯನ್ನು ಗುರುತಿಸುವ ಸಲುವಾಗಿ ಮಕ್ಕಳ ಮತ್ತು ಗರ್ಭಿಣಿಯರ ತೂಕವನ್ನು ಅಳೆಯಲು ತೂಕದ ಯಂತ್ರಗಳನ್ನು ಅಂಗನವಾಡಿ ಕೇಂದ್ರಗಳಿಗೆ ಒದಗಿಸಲಾಗುತ್ತಿದೆ.

ಹಾಗೂ ಅಂಗನವಾಡಿ ಕೇಂದ್ರಗಳನ್ನು ದಾಖಲೆಗಳನ್ನು, ಫಲಾನುಭವಿಗಳ ವಿವರ ಮತ್ತು ಇತರೆ ವಿವರಗಳನ್ನು ನಿರ್ವಹಿಸಲು ಐಸಿಡಿಎಸ್ CAS(Common application soft ware) ಅನ್ನು ಅಭಿವೃದ್ಧಿಪಡಿಸಲಾಗಿದ್ದು,ಇದಕ್ಕಾಗಿ ಅಂಗನವಾಡಿ ಕಾರ್ಯಕರ್ತೆಯರಿಗೆ ಸ್ಮಾರ್ಟ್ ಫೋನ್ ಒದಗಿಸಲಾಗುತ್ತಿದೆ.